# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 595
ಸದಸ್ಯರ ಹೆಸರು : ಶ್ರೀ ಐವನ್ ಡಿ' ಸೋಜಾ (ನಾಮ ನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 10-03-2020
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸ್ಮಾರ್ಟ್‌ಸಿಟಿ ಯೋಜನೆ ಅನ್ವಯ ರಾಜ್ಯದ ಯಾವ ಯಾವ ನಗರ ಪಾಲಿಕೆ ಯೋಜನೆಗಳು ಅನುದಾನವನ್ನು ಸ್ಮಾರ್ಟ್‌ಸಿಟಿಗೆ ಸೇರಿಸಲಾಗಿದೆ; (ವಿವರ ನೀಡುವುದು) | ಸ್ಮಾರ್ಟ್‌ಸಿಟಿ ಯೋಜನೆಯಡಿ ರಾಜ್ಯದಿಂದ 7 ನಗರಗಳಾದ ಬೆಳಗಾವಿ, ದಾವಣಗೆರೆ, ಹುಬ್ಬಳ್ಳಿ-ಧಾರವಾಡ, ಮಂಗಳೂರು, ಶಿವಮೊಗ್ಗ, ತುಮಕೂರು ಮತ್ತು ಬೆಂಗಳೂರು ನಗರಗಳು ಆಯ್ಕೆಯಾಗಿರುತ್ತವೆ.<br><br>ಯೋಜನಾವಧಿಯ 5 ವರ್ಷಗಳಲ್ಲಿ ಆಯ್ಕೆಯಾದ ನಗರಗಳು ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ರೂ.1000.00 ಕೋಟಿ (ಕೇಂದ್ರ ಮತ್ತು ರಾಜ್ಯದಿಂದ ತಲಾ ರೂ.500.00 ಕೋಟಿ) ಪಡೆಯಲಿವೆ. ಕೇಂದ್ರವು ಆಯಾ ನಗರ ಪಾಲಿಕೆಯ ಪರವಾಗಿ ತನ್ನ ಅನುದಾನವನ್ನು (ರೂ.500.00 ಕೋಟಿ) ನೀಡಲಿದೆ.<br><br>ಸದರಿ ಅಭಿಯಾನದಡಿಯಲ್ಲಿನ ಕಾಮಗಾರಿಗಳಿಗೆ ನಗರ ಪಾಲಿಕೆಗಳ ಯಾವುದೇ ಅನುದಾನಗಳನ್ನು ಸೇರಿಸಿಕೊಂಡಿರುವುದಿಲ್ಲ. |
| ಆ) | ಸ್ಮಾರ್ಟ್‌ಸಿಟಿ ಅನ್ವಯ ಯಾವ ಯಾವ ಕಾಮಗಾರಿಗಳನ್ನು ನಡೆಸಬೇಕೆಂದು ಮಾನದಂಡಗಳನ್ನು ಹಾಕಲಾಗಿದೆ; ಮಾನದಂಡಗಳೇನಾದರೂ ಇದ್ದಲ್ಲಿ (ವಿವರ ನೀಡುವುದು) | ಅಭಿಯಾನದ ಮಾರ್ಗಸೂಚಿಯಲ್ಲಿ 10 ವಿಶಾಲ ವರ್ಗಗಳನ್ನು ಸೂಚಿಸಿದ್ದು, ಪ್ರಸ್ತಾಪಿಸುವ ಕಾಮಗಾರಿಗಳು ಈ ಯಾವುದಾದರೂ 10 ವರ್ಗಗಳಿಗೆ ಸೇರಿರಬೇಕಾಗಿರುತ್ತದೆ.<br><br>*ನೀರು ಸರಬರಾಜು, ವಿದ್ಯುಚ್ಛಕ್ತಿ ಸರಬರಾಜು, ನೈರ್ಮಲ್ಯ ಹಾಗೂ ಘನತ್ಯಾಜ್ಯ ನಿರ್ವಹಣೆ, ಸಾರ್ವಜನಿಕ ಸಾರಿಗೆ, ಕೈಗೆಟುಕುವ ದರದಲ್ಲಿ ವಸತಿ, ಮಾಹಿತಿ ತಂತ್ರಜ್ಞಾನ ಮತ್ತು ಡಿಜಿಟಲೀಕರಣ ಮೂಲಕ ಸಾರ್ವಜನಿಕ ಸೇವೆ ಒದಗಿಸುವುದು. ಇ-ಆಡಳಿತ, ಸುಸ್ಥಿರ ಪರಿಸರ, ಸಾರ್ವಜನಿಕರ ಸುರಕ್ಷತೆ, ಆರೋಗ್ಯ ಮತ್ತು ಶಿಕ್ಷಣ-ಈ ವರ್ಗಗಳಲ್ಲಿ ಕಾಮಗಾರಿಗಳನ್ನು ಕೈಗೊಳ್ಳಬಹುದಾಗಿರುತ್ತದೆ.*<br><br>ಮಾರ್ಗಸೂಚಿಯ ಸಂಬಂಧಿತ ಪ್ರತಿಯನ್ನು **"ಅನುಬಂಧ-1 ರಲ್ಲಿ"** ನೀಡಿದೆ. |
| ಇ) | ಸ್ಮಾರ್ಟ್‌ಸಿಟಿ ಯೋಜನೆಯ ಕಾರ್ಯನಿರ್ವಹಣೆ ಬಗ್ಗೆ ಅತೃಪ್ತಿ ಇರುವುದರಿಂದ ಮತ್ತು ನಗರಪಾಲಿಕೆಯ ಸಹಕಾರ ಪಡೆಯಲು ವಿಫಲವಾಗಿರುವುದರಿಂದ ಈ ಯೋಜನೆಗಳನ್ನು ನಿಲ್ಲಿಸಲು ಸರ್ಕಾರದ ಮುಂದೆ ಪ್ರಸ್ತಾವನೆಗಳಿವೆಯೇ? (ವಿವರ ನೀಡುವುದು) | ಸ್ಮಾರ್ಟ್‌ಸಿಟಿ ಯೋಜನೆಯು ಯಶಸ್ವಿಯಾಗಿ ಅನುಷ್ಠಾನಗೊಳ್ಳುತ್ತಿದ್ದು, ಸದರಿ ಯೋಜನೆಯನ್ನು ನಿಲ್ಲಿಸುವ ಬಗ್ಗೆ ಸರ್ಕಾರದ ಮುಂದೆ ಯಾವುದೇ ಪ್ರಸ್ತಾವನೆಗಳು ಇರುವುದಿಲ್ಲ. |
| ಈ) | ರಾಜ್ಯದ ಯಾವ ಯಾವ ನಗರ ಪಾಲಿಕೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಇದೆ; ಕುಡಿಯುವ ನೀರನ್ನು ಪೂರೈಸಲು ಸರ್ಕಾರದ ಮುಂದೆ ಇರುವ | **ಕೆಯುಐಡಿಎಫ್‌ಸಿ ವತಿಯಿಂದ:**<br><br>**ಏಷ್ಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣಾ ಕಾರ್ಯಕ್ರಮದಡಿ (ಕ್ವಿಮಿಪ್)**<br><br>ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಮತ್ತು ಅಮೃತ್ ನೆರವಿನ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣಾ ಕಾರ್ಯಕ್ರಮದಡಿ (ಕ್ವಿಮಿಪ್) ರಾಜ್ಯದ |

| | | |
|---|---|---|
| | ಯೋಜನೆಗಳಾವುವು? (ವಿವರ ನೀಡುವುದು) | ಆಯ್ದ 2 ಮಹಾನಗರಪಾಲಿಕೆಗಳಲ್ಲಿ ಕುಡಿಯುವ ನೀರು ಸರಬರಾಜು ಕಾಮಗಾರಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. |

ಯೋಜನೆಯ ವಿವರವನ್ನು **ಅನುಬಂಧ-2** ರಲ್ಲಿ ನೀಡಿದೆ.

**ಏಷ್ಯನ್ ಅಭಿವೃದ್ಧಿ ಬ್ಯಾಂಕ್ (ಎ.ಡಿ.ಬಿ) ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕೆ ಕಾರ್ಯಕ್ರಮ (ಎನ್‌ಕೆಯುಎಸ್‌ಐಪಿ)**

ಕರ್ನಾಟಕ ರಾಜ್ಯದ 10 ಮಹಾನಗರಪಾಲಿಕೆ ಪೈಕಿ ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಹಾಗೂ ಹಣಕಾಸು ನಿಗಮ ವತಿಯಿಂದ ಏಷ್ಯನ್ ಅಭಿವೃದ್ಧಿ ಬ್ಯಾಂಕ್ (ಎ.ಡಿ.ಬಿ) ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕೆ ಕಾರ್ಯಕ್ರಮ (ಎನ್‌ಕೆಯುಎಸ್‌ಐಪಿ) ಅಡಿಯಲ್ಲಿ 6 ಮಹಾನಗರ ಪಾಲಿಕೆಯಲ್ಲಿ ವಿವಿದ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. ಇದರಲ್ಲಿ ಬಳ್ಳಾರಿ ಮಹಾನಗರ ಪಾಲಿಕೆ ವ್ಯಾಪ್ತಿಗೆ ಕುಡಿಯುವ ನೀರು ಸರಬರಾಜು ಕಾಮಗಾರಿಯನ್ನು ಹಮ್ಮಿಕೊಂಡಿದ್ದು, 8 ಪ್ಯಾಕೇಜು ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. 7 ಪ್ಯಾಕೇಜು ಕಾಮಗಾರಿ ಪೂರ್ಣಗೊಂಡಿರುತ್ತದೆ. ಉಳಿದ 24/7 ಕುಡಿಯುವ ನೀರು ಸರಬರಾಜು ಕಾಮಗಾರಿ ಪ್ರಗತಿಯ ಹಂತದಲ್ಲಿದೆ.

ಕಾಮಗಾರಿವಾರು ವಿವರ ಈ ಕೆಳಕಂಡಂತಿದೆ:

| ಕ್ರ. ಸಂ. | ಕಾಮಗಾರಿ ವಿವರ | ಗುತ್ತಿಗೆ ಮೊತ್ತ (ರೂ.ಕೋಟಿ) |
|---|---|---|
| 1 | ಸಗಟು ನೀರು ಸರಬರಾಜು ವ್ಯವಸ್ಥೆ ಸುಧಾರಣೆ (ಪ್ಯಾಕೇಜು-02ಬಿಎಲ್‌ವೈ01ಎ). | 42.84 (ಪೂರ್ಣಗೊಂಡಿದೆ) |
| 2 | ಬಳ್ಳಾರಿ ನಗರದ ಆಲಿಪುರ್ ಹಾಗೂ ಸಂಗನಕಲ್‌ನಲ್ಲಿ ನೀರು ಶುದ್ಧೀಕರಣ ಘಟಕ ನಿರ್ಮಾಣ ಹಾಗೂ ಸಂಬಂಧಿತ ಕಾಮಗಾರಿಗಳು (ಪ್ಯಾಕೇಜು-02ಬಿಎಲ್‌ವೈ01ಬಿ). | 50.98 (ಪೂರ್ಣಗೊಂಡಿದೆ) |
| 3 | ಬಳ್ಳಾರಿ ನಗರದಲ್ಲಿ ಫೀಡರ್ ಮೈನ್, ವಿತರಣ ಜಾಲ, ಎಂ.ಬಿ.ಆರ್ ನಿರ್ಮಾಣ (ಪ್ಯಾಕೇಜು-02ಬಿಎಲ್‌ವೈ01ಸಿ). | 36.2 (ಪೂರ್ಣಗೊಂಡಿದೆ) |
| 4 | ಹೆಡ್ ವರ್ಕ್ಸ್‌ಗೆ ರಸ್ತೆ ಮಾರ್ಗ, ಕಾವಲುಗಾರರ ಕೊಠಡಿ ನಿರ್ಮಾಣ (ಪ್ಯಾಕೇಜು ಸಂಖ್ಯೆ 02ಬಿಎಲ್‌ವೈ01ಡಿ) | 0.5 (ಪೂರ್ಣಗೊಂಡಿದೆ) |
| 5 | ನೀರು ಸರಬರಾಜು - ಮೋಕಾ ಹೆಡ್ ವರ್ಕ್ಸ್ ಹತ್ತಿರ ತಡೆ ಗೋಡೆ ಮತ್ತು ಪೈಪ್ ಕಲ್‌ವರ್ಟ್ ನಿರ್ಮಾಣ (ಪ್ಯಾಕೇಜು ಸಂಖ್ಯೆ 02ಬಿಎಲ್‌ವೈ01ಇ) | 0.55 (ಪೂರ್ಣಗೊಂಡಿದೆ) |
| 6 | ಬಳ್ಳಾರಿ ನಗರದಲ್ಲಿ ನೀರು ಸರಬರಾಜು ಸುದಾರಣೆ ಟ್ರೆಂಚ್ ಲೆಸ್ ತಂತ್ರಜ್ಞಾನದ 1067 ಎಂಎಂ ಎಂಎಸ್ ಪೈಪ್ ಅನ್ನು 150 ಎಂಎಂ ಡಯಾ ಎಂಎಸ್ ಪೈಪ್ ರೈಲ್ವೇ ಲೈನ್ ಅಡ್ಡಲಾಗಿ ಆಲಿಪುರ್ ನೀರು ಶುದ್ಧೀಕರಣ ಘಟಕದ ಹತ್ತಿರ 85.30 ಮೀ ಪೈಪ್ ಅಳವಡಿಕೆ (ಪ್ಯಾಕೇಜು ಸಂಖ್ಯೆ 02ಬಿಎಲ್‌ವೈ01ಎಫ್) | 1.74 (ಪೂರ್ಣಗೊಂಡಿದೆ) |
| 7 | ಬಳ್ಳಾರಿ ನಗರದಲ್ಲಿ ನೀರು ಶುದ್ಧೀಕರಣ ಘಟಕಕ್ಕಾಗಿ ರಸ್ತೆ ಮಾರ್ಗ ನಿರ್ಮಾಣ, ಕಾವಲುಗಾರರ ಕೊಠಡಿ ಮತ್ತು ಶೌಚಾಲಯ ನಿರ್ಮಾಣ (ಪ್ಯಾಕೇಜು ಸಂಖ್ಯೆ 02ಬಿಎಲ್‌ವೈ01ಜಿ) | 0.52 (ಪೂರ್ಣಗೊಂಡಿದೆ) |
| 8 | ಬಳ್ಳಾರಿ ನಗರಕ್ಕೆ 24/7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಬಿಎಲ್‌ವೈ01) | 68.77 (ಪ್ರಗತಿಯಲ್ಲಿದೆ) |

ಪ್ರಗತಿಯಲ್ಲಿರುವ 24/7 ನೀರು ಸರಬರಾಜು ಪ್ಯಾಕೇಜ್‌ನಲ್ಲಿ 464 ಕಿ.ಮೀ ವಿವಿಧ ವ್ಯಾಸದ ವಿತರಣಾ ಜಾಲದ ಕೊಳವೆಯನ್ನು ಅಳವಡಿಸಬೇಕಾಗಿದ್ದು, ಅದರಲ್ಲಿ 345 ಕಿ.ಮೀ ಅಳವಡಿಸಲಾಗಿರುತ್ತದೆ.

ಮನೆ ಸಂಪರ್ಕ 44955 ಕ್ಕೆ 24230 ಸಂಪರ್ಕಗಳನ್ನು ನೀಡಲಾಗಿದೆ. ಬಾಕಿ ಕಾಮಗಾರಿ ಪ್ರಗತಿಯಲ್ಲಿದೆ.

ನೀರು ಸರಬರಾಜು ನಿರ್ವಹಣೆಯನ್ನು ಸದ್ಯಕ್ಕೆ ಬಳ್ಳಾರಿ ಮಹಾನಗರ ಪಾಲಿಕೆಯೇ ನಿರ್ವಹಿಸುತ್ತಿರುತ್ತದೆ. ಯೋಜನೆಯು ಪೂರ್ಣಗೊಂಡ ನಂತರ ಕಾರ್ಯಚರಣೆ ಮತ್ತು ನಿರ್ವಹಣೆಯನ್ನು ಗುತ್ತಿಗೆ ಕರಾರಿನಂತೆ ಗುತ್ತಿಗೆದಾರರೇ ನಿರ್ವಹಿಸಬೇಕಾಗಿರುತ್ತದೆ. ಸದರಿ ಕಾಮಗಾರಿಯನ್ನು 2020-21 ರ ಆರ್ಥಿಕ ವರ್ಷದಲ್ಲಿ ಪೂರ್ಣಗೊಳಸಲು ಉದ್ದೇಶಿಸಲಾಗಿದೆ.

**ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ನಗರ ನೀರು ಸರಬರಾಜು ಆಧುನೀಕರಣ ಯೋಜನೆ (ಕೆಯುಡಬ್ಲ್ಯೂಎಸ್‌ಎಂಪಿ)**

ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ನಗರ ನೀರು ಸರಬರಾಜು ಆಧುನೀಕರಣ ಯೋಜನೆ (ಕೆಯುಡಬ್ಲ್ಯೂಎಸ್‌ಎಂಪಿ)ಯಲ್ಲಿ ಹುಬ್ಬಳ್ಳಿ-ಧಾರವಾಡ, ಬೆಳಗಾವಿ ಮತ್ತು ಕಲಬುರಗಿ ಮಹಾನಗರ ಪಾಲಿಕೆಗಳ ವ್ಯಾಪ್ತಿ ಪ್ರದೇಶಗಳಿಗೆ 24X7 ಕುಡಿಯುವ ನೀರು ಸರಬರಾಜು ಯೋಜನೆಯನ್ನು ಅನುಷ್ಠಾನಗೊಳಸಲು ಟೆಂಡರ್ ಕರೆಯಲಾಗಿದ್ದು, ಟೆಂಡರ್ ಪ್ರಕ್ರಿಯೆ ಅಂತಿಮ ಹಂತದಲ್ಲಿದೆ.

**ಪೌರಾಡಳತ ನಿರ್ದೇಶನಾಲಯದ ವತಿಯಿಂದ:**

ತುಮಕೂರು, ಕಲಬುರಗಿ, ಬಳ್ಳಾರಿ ಮತ್ತು ವಿಜಯಪುರ ಮಹಾನಗರ ಪಾಲಿಕೆಗಳಗೆ ಕುಡಿಯುವ ನೀರಿನ ಸಮಸ್ಯೆ ಬಗೆಹರಿಸುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ.

ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕುಡಿಯುವ ನೀರನ್ನು ಪೂರೈಸಲು ಪೌರಾಡಳತ ನಿರ್ದೇಶನಾಲಯದಿಂದ ಅನುಷ್ಟಾನಗೊಳಸಲಾಗುತ್ತಿರುವ ಯೋಜನೆಗಳು ಈ ಕೆಳಕಂಡಂತಿರುತ್ತದೆ:

- ಎಸ್.ಎಫ್.ಸಿ ಕುಡಿಯುವ ನೀರು ಯೋಜನೆ
- ನಗರೋತ್ಥಾನ ಯೋಜನೆ.
- 14ನೇ ಹಣಕಾಸು ಯೋಜನೆ.

**ಕನನೀಸ ಮತ್ತು ಒಚ ಮಂಡಳ ವತಿಯಿಂದ:**

ರಾಜ್ಯದಲ್ಲಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆ ಹೊರತುಪಡಿಸಿ 10 ಮಹಾ ನಗರಪಾಲಿಕೆಗಳರುತ್ತವೆ.

ಇವುಗಳಲ್ಲಿ 1)ಕಲಬುರಗಿ, 2)ಹುಬ್ಬಳ್ಳಿ-ಧಾರವಾಡ, 3)ವಿಜಯಪುರ, 4)ಶಿವಮೊಗ್ಗ, 5)ಬೆಳಗಾವಿ ಮಹಾನಗರ ಪಾಲಿಕೆಗಳ ನೀರು ಸರಬರಾಜು ವ್ಯವಸ್ಥೆಯನ್ನು ಮಂಡಳವತಿಯಿಂದ ನಿರ್ವಹಿಸಲಾಗುತ್ತಿದ್ದು ಈ ಮಹಾನಗರ ಪಾಲಿಕೆಗಳ ಪೈಕಿ ಕಲಬುರಗಿ ಹೊರತುಪಡಿಸಿ ಉಳದ ಮಹಾನಗರಪಾಲಿಕೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಇರುವುದಿಲ್ಲ. ವಿವರಗಳು ಈ ಕೆಳಕಂಡಂತಿದೆ:

| | | |
|---|---|---|
| | | **1. ಕಲಬುರಗಿ ಮಹಾನಗರ ಪಾಲಿಕೆ:**<br>ಕಲಬುರಗಿ ನಗರದ ಕುಡಿಯುವ ನೀರಿನ ಸಮಸ್ಯೆಗೆ ಶಾಶ್ವತ ಪರಿಹಾರ ಒದಗಿಸಲು, ಬೆಣ್ಣೆತೋರಾ ಅಣೆಕಟ್ಟನ್ನು ಮೂಲವಾಗಿಟ್ಟುಕೊಂಡು, ನಗರದ ಎಲ್ಲಾ ಪ್ರದೇಶಗಳಿಗೆ ನಿರಂತರ ನೀರು ಸರಬರಾಜು ಮಾಡುವ ಯೋಜನೆಯನ್ನು ಕೆ.ಯು.ಐ.ಡಿ.ಎಫ್.ಸಿ ಸಂಸ್ಥೆಯಿಂದ ವಿಶ್ವ ಬ್ಯಾಂಕ್ ನೆರವಿನಲ್ಲಿ ಕೈಗೆತ್ತಿಕೊಂಡಿದೆ.<br><br>**2. ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ:**<br>ಮಹಾನಗರ ಪಾಲಿಕೆಯ ಠೇವಣಿ ಕೊಡುಗೆಯಡಿ ಮಂಡಳಿ ವತಿಯಿಂದ ರೂ. 26.00 ಕೋಟಿಗಳ ಮಲಪ್ರಭಾ ಸಗಟು ನೀರು ಸರಬರಾಜು ಅಭಿವೃದ್ಧಿ ಕಾಮಗಾರಿಯನ್ನು ಕೈಗೊಂಡು ದಿನಾಂಕ:08-02-2020ರಲ್ಲಿ ಚಾಲನೆಗೊಳಸಲಾಗಿದೆ.<br><br>ಪ್ರಸ್ತುತ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ನೀರು ಸರಬರಾಜು ಅಭಿವೃದ್ಧಿ ಯೋಜನೆಗಳನ್ನು ಕೆ.ಯು.ಐ.ಡಿ.ಎಫ್.ಸಿ ಸಂಸ್ಥೆಯಿಂದ ವಿಶ್ವ ಬ್ಯಾಂಕ್ ನೆರವಿನಲ್ಲಿ ಕೈಗೆತ್ತಿಕೊಂಡಿದೆ. **ಅನುಬಂಧ-2** ರಲ್ಲಿ ನೀಡಿದೆ.<br><br>**3. ವಿಜಯಪುರ ಮಹಾನಗರ ಪಾಲಿಕೆ:**<br>ವಿಜಯಪುರ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಈ ಕೆಳಕಂಡ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ:<br>1. ಅಮೃತ ಯೋಜನೆಯ, ಮೂಲ ಅನುದಾನದಡಿ ವಿಜಯಪುರ ನಗರದಲ್ಲಿ ಬರುವ 15 ಝೋನ್‌ಗಳಿಗೆ ನಿರಂತರ ಒತ್ತಡಯುಕ್ತ ನೀರು ಸರಬರಾಜು ಒದಗಿಸುವ ಕಾಮಗಾರಿಯನ್ನು ರೂ. 156.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಕೈಗೊಂಡಿದ್ದು, ಪ್ರಗತಿಯಲ್ಲಿರುತ್ತದೆ.<br>2. ಅಮೃತ ಯೋಜನೆಯ, ಹೆಚ್ಚುವರಿ ಅನುದಾನದಡಿ, ವಿಜಯಪುರ ನಗರದಲ್ಲಿ ಬರುವ 2 ಝೋನ್‌ಗಳಿಗೆ ನಿರಂತರ ಒತ್ತಡಯುಕ್ತ ನೀರು ಸರಬರಾಜು ಮಾಡುವ ಕಾಮಗಾರಿಯನ್ನು ರೂ. 21.98 ಕೋಟಿಗಳ ಅಂದಾಜು ವೆಚ್ಚದಲ್ಲಿ ಕೈಗೊಂಡಿದ್ದು, ಪ್ರಗತಿಯಲ್ಲಿರುತ್ತದೆ.<br>3. ನಗರೋತ್ಥಾನ 3ನೇ ಹಂತದ ಯೋಜನೆಯಡಿ, (ಠೇವಣಿ ಕೊಡುಗೆ ಕಾಮಗಾರಿ) ವಿಜಯಪುರ ನಗರದ ನೀರು ಸರಬರಾಜು ವ್ಯವಸ್ಥೆಯನ್ನು ಸುಧಾರಣೆಗೊಳಸಲು ಭೂತನಾಳ ಕೆರೆಯಲ್ಲಿ ಹೆಚ್ಚುವರಿಯಾಗಿ 10 ದಶಲಕ್ಷ ಲೀಟರ್ ಜಲಶುದ್ಧೀಕರಣ ಘಟಕವನ್ನು ನಿರ್ಮಿಸುವ ಕಾಮಗಾರಿಯನ್ನು ರೂ. 15.00 ಕೋಟಿಗಳ ಅಂದಾಜು ಮೊತ್ತದಲ್ಲಿ ಕೈಗೊಂಡಿದ್ದು, ಪ್ರಗತಿಯಲ್ಲಿರುತ್ತದೆ.<br>4. ವಿಜಯಪುರ ನಗರಕ್ಕೆ ಕೃಷ್ಣಾ ನದಿಯಿಂದ (ಆಲಮಟ್ಟಿ ಜಲಾಶಯದ ಹಿನ್ನೀರು) ನೀರು ಸರಬರಾಜು ಮಾಡುವ 2ನೇ ಹಂತದ ನೀರು ಸರಬರಾಜು ವ್ಯವಸ್ಥೆಯ ಸಗಟು ನೀರು ಸರಬರಾಜನ್ನು ಅಭಿವೃದ್ಧಿಗೊಳಸುವ ರೂ.32.00 ಕೋಟಿಗಳ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

| | | |
|---|---|---|
| | | **4. ಶಿವಮೊಗ್ಗ ಮಹಾನಗರ ಪಾಲಿಕೆ:**<br>ಶಿವಮೊಗ್ಗ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಶಾಶ್ವತವಾಗಿ ಕುಡಿಯುವ ನೀರಿನ ಅಭಾವ ಪರಿಹರಿಸಲು ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ:<br><br>1 ಶಿವಮೊಗ್ಗ ನಗರದ ನವೀಕೃತ ವಿಸ್ತರಣಾ ಜಾಲದ ಯೋಜನೆಯನ್ನು ರೂ. 60.65 ಕೋಟಿಗಳ ಅಂದಾಜು ಮೊತ್ತದಲ್ಲಿ ಕೈಗೊಂಡಿದ್ದು, ಪ್ರಗತಿಯಲ್ಲಿರುತ್ತದೆ.<br>2 ಶಿವಮೊಗ್ಗ ನಗರದ ನೀರು ಸರಬರಾಜು ವ್ಯವಸ್ಥೆ ಅಭಿವೃದ್ಧಿ ಪಡಿಸಲು ಗಾಜನೂರು ಹೆಡ್ ವರ್ಕ್ಸ್‌ನಿಂದ ಕೆ.ಆರ್.ವಾಟರ್ ವರ್ಕ್ಸ್‌ವರೆಗೆ 1067 ಮಿ.ಮೀ ವ್ಯಾಸದ ಎಂ.ಎಸ್. ಗ್ರಾವಿಟಿ ಕೊಳವೇ ಮಾರ್ಗ ಅಳವಡಿಸುವ ಕಾಮಗಾರಿ ಪೂರ್ಣಗೊಳಸಲಾಗಿದೆ., ಕೆ.ಆರ್. ವಾಟರ್ ವರ್ಕ್ಸ್‌ನಲ್ಲಿ ಹಳೇ ಪಂಪಿಂಗ್ ಮಿಷನರಿ ಬದಲಾವಣೆ ಮತ್ತು ಇತರೆ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಅಂದಾಜು ಮೊತ್ತ ರೂ.44.40 ಕೋಟಿಗಳು.<br>3 ಶಿವಮೊಗ್ಗ ನಗರದಲ್ಲಿ ನಿರಂತರ 24/7 ನೀರು ಸರಬರಾಜು ವಿತರಣಾ ಯೋಜನೆಯನ್ನು ರೂ.104.90 ಕೋಟಿಗಳ ಅಂದಾಜು ಮೊತ್ತದಲ್ಲಿ ಕೈಗೊಂಡಿದ್ದು, ಪ್ರಗತಿಯಲ್ಲಿರುತ್ತದೆ.<br>**5. ಬೆಳಗಾವಿ ಮಹಾನಗರ ಪಾಲಿಕೆ:**<br>ಪ್ರಸ್ತುತ ಬೆಳಗಾವಿ ನಗರದ ಎಲ್ಲ ವಾರ್ಡುಗಳಲ್ಲಿ 24/7 ನಿರಂತರ ನೀರು ಸರಬರಾಜು ಮಾಡುವ ವಿಶ್ವ ಬ್ಯಾಂಕ್ ನೆರವಿನ ಯೋಜನೆಯನ್ನು ಕೆ.ಯು.ಐ.ಡಿ.ಎಫ್.ಸಿ ಸಂಸ್ಥೆಯಿಂದ ಕೈಗೆತ್ತಿಕೊಂಡಿದೆ. ವಿವರಗಳನ್ನು **ಅನುಬಂಧ-2** ರಲ್ಲಿ ನೀಡಿದೆ.<br><br>**6 . ಮೈಸೂರು ಮಹಾನಗರ ಪಾಲಿಕೆ:**<br>ಮೈಸೂರು ಮಹಾನಗರ ಪಾಲಿಕೆಯಲ್ಲಿ ಕುಡಿಯುವ ನೀರು ಸರಬರಾಜು ಅಭಿವೃದ್ಧಿ ಪಡಿಸಲು ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.<br>1. ಜೆ.ಎನ್.ನರ್ಮ್ ಪರಿವರ್ತನಾ ಹಂತದಡಿ ಮೈಸೂರು ನಗರಕ್ಕೆ ನಿರಂತರ ನೀರು ಸರಬರಾಜು ಕಾಮಗಾರಿ ವೆಚ್ಚ ರೂ.213.99 ಕೋಟಿಗಳು ಪ್ರಗತಿಯಲ್ಲಿರುತ್ತದೆ.<br>2. ಅಮೃತ್ ಯೋಜನೆಯಡಿ ಮೈಸೂರು ನಗರಕ್ಕೆ ಸಗಟು ನೀರು ಸರಬರಾಜು ಮಾಡುವ ಕಾಮಗಾರಿ ವೆಚ್ಚ ರೂ.156.00 ಕೋಟಿಗಳು ಪ್ರಗತಿಯಲ್ಲಿರುತ್ತದೆ.<br>3. ಹಳೇ ಉಂಡವಾಡಿ ಗ್ರಾಮದ ಬಳಿ ಕಾವೇರಿ ನದಿ ಮೂಲದಿಂದ ಮೈಸೂರು ನಗರ, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ಹಾಗೂ ಮೈಸೂರು ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯ ಹೊರಗಡೆ ಇರುವ 92 ಗ್ರಾಮಗಳಿಗೆ ಕುಡಿಯುವ ನೀರು ಸರಬರಾಜು ಯೋಜನೆಯ ಅಂದಾಜು ವೆಚ್ಚ ರೂ.350.00 ಕೋಟಿಗಳಿಗೆ ಅನುಮೋದನೆಯಾಗಿದ್ದು ಪ್ರಸ್ತುತ ಈ ಯೋಜನೆಗೆ ಅವಶ್ಯಕವಿರುವ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. |

| | | |
|---|---|---|
| | | **7. ಮಂಗಳೂರು ಮಹಾನಗರ ಪಾಲಿಕೆ:**<br>ಮಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ನೀರು ಸರಬರಾಜು ಯೋಜನೆಗಳನ್ನು ಕೆ.ಯು.ಐ.ಡಿ.ಎಫ್.ಸಿ ಸಂಸ್ಥೆ ವತಿಯಿಂದ ಕೈಗೊಳ್ಳಲಾಗಿದೆ. ವಿವರಗಳನ್ನು **ಅನುಬಂಧ-2** ರಲ್ಲಿ ನೀಡಿದೆ.<br><br>**8. ಬಳ್ಳಾರಿ ಮಹಾನಗರ ಪಾಲಿಕೆ:**<br>ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ನೀರು ಸರಬರಾಜು ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ರೂ.7070.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲಾಗಿದೆ.<br><br>ಈ ಯೋಜನೆಯಡಿ ಮೋಕಾ ಜಲಶುದ್ಧೀಕರಣ ಘಟಕದಲ್ಲಿ ಪಂಪ್‌ಹೌಸ್, 813 ಮಿ.ಮೀ ವ್ಯಾಸದ ರೈಸಿಂಗ್ ಮೇನ್, ಮೋಕಾ ಮತ್ತು ಅಲ್ಲೀಪುರ ಕೆರೆಗಳ ಪುನಶ್ಚೇತನ ಕಾಮಗಾರಿ, ಅಲ್ಲೀಪುರದಲ್ಲಿ ಆರ್.ಸಿ.ಸಿ ಇನ್‌ಟೇಕ್ ವೆಲ್ ಕಾಮಗಾರಿಗಳು ಪೂರ್ಣಗೊಂಡಿದ್ದು, ಪ್ರಸ್ತುತ ಮೋಕಾ ಹತ್ತಿರ 800 ಮಿಲಿಯನ್ ಲೀಟರ್ ಸಾಮರ್ಥ್ಯದ ಹೊಸ ಕೆರೆ ನಿರ್ಮಾಣ ಕಾಮಗಾರಿಯು ಪ್ರಗತಿಯಲ್ಲಿದೆ.<br><br>ಬಳ್ಳಾರಿ ನಗರಕ್ಕೆ ಕುಡಿಯುವ ನೀರು ಪೂರೈಸಲು ಎರಡು ಯೋಜನೆಗಳನ್ನು ತಯಾರಿಸಲಾಗುತ್ತಿದೆ.<br>1) ಬಳ್ಳಾರಿ ನಗರಕ್ಕೆ 5 ಕಿ.ಮೀ ದೂರದಲ್ಲಿರುವ ಕೊಳಗಲ್ಲು ಕೆರೆಯಿಂದ ಹೆಚ್ಚುವರಿ ನೀರು ಸರಬರಾಜು ಮಾಡುವ ಅಂದಾಜು ಪಟ್ಟಿಯನ್ನು ತಯಾರಿಸಲು ಸರ್ವೆ ಕಾರ್ಯಕ್ಕಾಗಿ ಜಿಲ್ಲಾ ಖನಿಜ ನಿಧಿ ಅಡಿಯಲ್ಲಿ ಟೆಂಡರ್ ಕರೆದಿದ್ದು, ಅಂದಾಜು ಪಟ್ಟಿಯನ್ನು ತಯಾರಿಸುವ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ.<br>2) ಬಳ್ಳಾರಿ ನಗರಕ್ಕೆ 70 ಕಿ.ಮೀ ದೂರದಲ್ಲಿರುವ ತುಂಗಭದ್ರಾ ಅಣೆಕಟ್ಟಿನಿಂದ ನೀರು ಸರಬರಾಜು ಮಾಡಲು ಸರ್ವೆ ಕಾರ್ಯವನ್ನು ಕೈಗೊಂಡಿದ್ದು, ಸದರಿ ಯೋಜನೆಯ ಅಂದಾಜು ಪಟ್ಟಿಯನ್ನು ತಯಾರಿಸುವ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ.<br><br>**9. ತುಮಕೂರು ಮಹಾನಗರ ಪಾಲಿಕೆ:**<br>ತುಮಕೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಶಾಶ್ವತವಾಗಿ ಕುಡಿಯುವ ನೀರಿನ ಅಭಾವ ಪರಿಹರಿಸಲು ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.<br>1. ತುಮಕೂರು ನಗರಕ್ಕೆ ಯು.ಐ.ಡಿ.ಎಸ್.ಎಸ್.ಎಂ.ಟಿ. ಯೋಜನೆಯಡಿ ನಿರಂತರ ನೀರು ಸರಬರಾಜು ಯೋಜನೆಯನ್ನು ರೂ.104.90 ಕೋಟಿಗಳ ಅಂದಾಜು ಮೊತ್ತದಲ್ಲಿ ಕೈಗೊಂಡಿದ್ದು, ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br>2. ತುಮಕೂರು ನಗರಕ್ಕೆ ಅಮೃತ್ ಯೋಜನೆಯಡಿ ನೀರು ಸರಬರಾಜು ಸುಧಾರಣೆ ಯೋಜನೆಯನ್ನು ಒಟ್ಟು ರೂ.102.88 ಕೋಟಿಗಳ ಅಂದಾಜು ಮೊತ್ತದಲ್ಲಿ ಕೈಗೊಂಡಿದ್ದು, ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br>3. ತುಮಕೂರು ನಗರದ ಕುಡಿಯುವ ನೀರು ಸರಬರಾಜು ಸುಧಾರಣೆಗೆ ತುಮಕೂರು ಸ್ಮಾರ್ಟ್ ಸಿಟಿ ನಿಯಮಿತದ ಠೇವಣಿ ಕೊಡುಗೆ ಯೋಜನೆಯಡಿ ರೂ.56.55 ಕೋಟಿಗಳ ಅಂದಾಜು ಮೊತ್ತದಲ್ಲಿ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |

| | | |
|---|---|---|
| | | 10 **ದಾವಣಗೆರೆ ಮಹಾನಗರ ಪಾಲಿಕೆ:-**<br>ದಾವಣಗೆರೆ ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ನೀರು ಸರಬರಾಜು ಯೋಜನೆಗಳನ್ನು ಕೆ.ಯು.ಐ.ಡಿ.ಎಫ್.ಸಿ ಸಂಸ್ಥೆ ವತಿಯಿಂದ ಕೈಗೊಳ್ಳಲಾಗಿದೆ. ವಿವರಗಳನ್ನು **ಅನುಬಂಧ-2** ರಲ್ಲಿ ನೀಡಿದೆ. |

ಸಂಖ್ಯೆ: ನಅಇ 77 ಸಿಎಸ್ಎಸ್ 2020

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು.

ಅನುಬಂಧ-1

# Smart Cities Mission

## 1. The Challenge of Urbanization

1.1 Cities are engines of growth for the economy of every nation, including India. Nearly 31% of India's current population lives in urban areas and contributes 63% of India's GDP (Census 2011). With increasing urbanization, urban areas are expected to house 40% of India's population and contribute 75% of India's GDP by 2030. This requires comprehensive development of physical, institutional, social and economic infrastructure. All are important in improving the quality of life and attracting people and investments to the City, setting in motion a virtuous cycle of growth and development. Development of Smart Cities is a step in that direction.

## 2. What is a 'smart city'

2.1 The first question is what is meant by a 'smart city'. The answer is, there is no universally accepted definition of a Smart City. It means different things to different people. The conceptualisation of Smart City, therefore, varies from city to city and country to country, depending on the level of development, willingness to change and reform, resources and aspirations of the city residents. A Smart City would have a different connotation in India than, say, Europe. Even in India, there is no one way of defining a Smart City.

2.2 Some definitional boundaries are required to guide cities in the Mission. In the imagination of any city dweller in India, the picture of a Smart City contains a wish list of infrastructure and services that describes his or her level of aspiration. To provide for the aspirations and needs of the citizens, urban planners ideally aim at developing the entire urban eco-system, which is represented by the four pillars of comprehensive development — institutional, physical, social and economic infrastructure. This can be a long term goal and cities can work towards developing such comprehensive infrastructure incrementally, adding on layers of 'smartness'.

2.3 In the approach to the Smart Cities Mission, the objective is to promote cities that provide core infrastructure and give a decent quality of life to its citizens, a clean and sustainable environment and application of 'Smart' Solutions. The focus is on sustainable and inclusive development and the idea is to look at compact areas, create a **replicable model which will act like a light house to other aspiring cities**. The Smart Cities Mission of the Government is a bold, new initiative. It is meant to set examples that can be replicated both within and outside the Smart City, catalysing the creation of similar Smart Cities in various regions and parts of the country.

2.4 The core infrastructure elements in a Smart City would include:

i. adequate water supply,

ii. assured electricity supply,

iii. sanitation, including solid waste management,

iv. efficient urban mobility and public transport,

v. affordable housing, especially for the poor,

vi. robust IT connectivity and digitalization,

vii. good governance, especially e-Governance and citizen participation,

viii. sustainable environment,

ix. safety and security of citizens, particularly women, children and the elderly, and

x. health and education.

2.5 As far as Smart Solutions are concerned, an illustrative list is given below. This is not, however, an exhaustive list, and cities are free to add more applications.




2.6 Accordingly, the purpose of the Smart Cities Mission is to drive economic growth and improve the quality of life of people by enabling local area development and harnessing technology, especially technology that leads to Smart outcomes. Area-based development will transform existing areas (retrofit and redevelop), including slums, into better planned ones, thereby improving liveability of the whole City. New areas (greenfield) will be developed around cities

## ಅನುಬಂಧ-2

| ಕ್ರಮ ಸಂಖ್ಯೆ | ಟ್ರ್ಯಾಂಚ್ ಸಂಖ್ಯೆ | ಕಾಮಗಾರಿಗಳ ವಿವರ | ಜಿಲ್ಲೆ | ಮಹಾನಗರ ಪಾಲಿಕೆ | ಭೌತಿಕ ಪ್ರಗತಿ | ಆರ್ಥಿಕ ಪ್ರಗತಿ | ಷರಾ |
|---|---|---|---|---|---|---|---|
| 1 | ಟ್ರ್ಯಾಂಚ್ -1 ದಾವಣಗೆರೆ ವಲಯ | 24/7 ಕುಡಿಯುವ ನೀರು ಸರಬರಾಜು ಕಾಮಗಾರಿ | ದಾವಣಗೆರೆ | ದಾವಣಗೆರೆ | 44.44 % | 40.29 % | ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |
| 2 | | ಸಗಟು ನೀರು ಕಾಮಗಾರಿ | ದಾವಣಗೆರೆ | ದಾವಣಗೆರೆ | 87.61 % | 85.06 % | ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |
| 3 | ಟ್ರ್ಯಾಂಚ್ -2 ಮಂಗಳೂರು ವಲಯ | 24/7 ಕುಡಿಯುವ ನೀರು ಸರಬರಾಜು ಕಾಮಗಾರಿ | ದಕ್ಷಿಣ ಕನ್ನಡ | ಮಂಗಳೂರು | - | 8.81 % | ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |
| 4 | | ಸಗಟು ನೀರು ಕಾಮಗಾರಿ | ದಕ್ಷಿಣ ಕನ್ನಡ | ಮಂಗಳೂರು | 6.07% | 14.21% | ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |

ಕಂಪನಿ ಕಾರ್ಯದರ್ಶಿ-ಪ್ರ
ಕೆಯುಐಡಿಎಫ್‌ಸಿ